# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 437

ಸದಸ್ಯರ ಹೆಸರು : ಶ್ರೀ ಯು.ಬಿ.ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು)

ಉತ್ತರಿಸುವ ದಿನಾಂಕ : 23-09-2020

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ದಿನಾಂಕ: 30.05.2008 ರಿಂದ 12.05.2013 ರ ಅವಧಿಯಲ್ಲಿ ಸರ್ಕಾರ ಯಾವ ಯಾವ ಉದ್ದೇಶಗಳಿಗಾಗಿ ಸರ್ಕಾರಿ ಭೂಮಿಯನ್ನು ಹಂಚಿಕೆ ಮಾಡಿದೆ; | ರಾಜ್ಯದಲ್ಲಿ ದಿನಾಂಕ: 30.05.2008 ರಿಂದ 12.05.2013 ರ ಅವಧಿಯಲ್ಲಿ ಕೈಗಾರಿಕೆ, ಶೈಕ್ಷಣಿಕ, ಸ್ಮಶಾನ, ಧಾರ್ಮಿಕ, ಸಾಮಾಜಿಕ ಚಟುವಟಿಕೆ, ಕಲ್ಯಾಣ ಚಟುವಟಿಕೆಗಳು, ಕೃಷಿ ಮತ್ತು ಕೃಷಿಯೇತರ ಮತ್ತು ಇನ್ನಿತರೆ ಉದ್ದೇಶಗಳಿಗಾಗಿ ಸರ್ಕಾರಿ ಭೂಮಿಯನ್ನು ಹಂಚಿಕೆ ಮಾಡಲಾಗಿದೆ. |
| ಆ) | ಯಾವ ಯಾವ ಕಂಪನಿಗಳಿಗೆ ಎಷ್ಟು ವಿಸ್ತೀರ್ಣದ ಭೂಮಿಯನ್ನು ಯಾವ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ; | ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಇ) | ಸರ್ಕಾರದ ಉದ್ದೇಶಗಳು ಸಫಲವಾಗಿವೆಯೇ; ಉದ್ದೇಶಗಳು ಅಥವಾ ಷರತ್ತುಗಳು ಉಲ್ಲಂಘನೆಯಾಗಿದ್ದ ಸಂದರ್ಭದಲ್ಲಿ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? | ಬಹುತೇಕ ಪ್ರಕರಣಗಳಲ್ಲಿ ಮಂಜೂರಾತಿ ಉದ್ದೇಶಗಳು ಸಫಲವಾಗಿರುತ್ತವೆ. ಭೂ ಮಂಜೂರಾತಿಯಾದ ಪ್ರಕರಣಗಳಲ್ಲಿ ಮಂಜೂರಾತಿ ಷರತ್ತು ಮತ್ತು ನಿಬಂಧನೆಗಳು ಪಾಲನೆಯಾಗಿರುವ ಬಗ್ಗೆ ಪರಾಮರ್ಶಿಸಿ ಉಲ್ಲಂಘನೆಯಾಗಿರುವ ಪ್ರಕರಣಗಳಲ್ಲಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 25ರನ್ವಯ ಕ್ರಮ ಜರುಗಿಸುವಂತೆ ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ 20 ಎಲ್‌ಜಿಪಿ 2020, ದಿನಾಂಕ: 20.01.2020ರಲ್ಲಿ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಕಟ್ಟುನಿಟ್ಟಿನ ಸೂಚನೆ ನೀಡಲಾಗಿದೆ. |

ಸಂಖ್ಯೆ: ಆರ್‌ಡಿ 114 ಎಲ್‌ಜಿಕ್ಯೂ 2020

(ಆರ್. ಅಶೋಕ)
ಕಂದಾಯ ಸಚಿವರು

ಅನುಬಂಧ

## ಕರ್ನಾಟಕ ವಿಧಾನ ಪರಿಷತ್ತಿನ ಚುಕ್ಕೆ ಗುರುತಿನ ಪ್ರಸಂ.437ರ ಅನುಬಂಧ

| ಕ್ರಸಂ. | ಕಂಪನಿಯ ವಿವರ | ಜಿಲ್ಲೆ | ವಿಸ್ತೀರ್ಣ (ಎಕರೆ-ಗುಂಟೆ) |
|---|---|---|---|
| 1. | ಬಿ.ಎಸ್.ಎನ್.ಎಲ್., ಶಿವಮೊಗ್ಗ | ಶಿವಮೊಗ್ಗ | 0-01.12 |
| 2. | | | 0-03 |
| 3. | ಕೆ.ಪಿ.ಟಿ.ಸಿ.ಎಲ್. ಶಿವಮೊಗ್ಗ | ಶಿವಮೊಗ್ಗ | 1-20 |
| 4. | ಯುರೇನಿಯಂ ಕಾರ್ಪೋರೇಷನ್ ಲಿ. | ಬೆಳಗಾವಿ | 6-00 |
| 5. | ಕೆ.ಪಿ.ಟಿ.ಸಿ.ಎಲ್. | ಧಾರವಾಡ | 1-20 |
| 6. | ಎಸ್.ಟಿ.ಎಸ್. ಲಿಮಿಟೆಡ್ | ಕೊಡಗು | 0-20 |
| 7. | ಇಂಡಿಯನ್ ಆಯಿಲ್ ಕಾರ್ಪೋರೇಷನ್ | ಉಡುಪಿ | 0-14 |
| 8. | ಶ್ರೀ ಶರಣ ಅಸೋಸಿಯೇಟ್ಸ್ | ಕೊಪ್ಪಳ | 2-00 |
| 9. | ಇಂಡಿಯನ್ ಆಯಿಲ್ ಕಾರ್ಪೋರೇಷನ್ | ಬೆಂಗಳೂರು ನಗರ | 150*100 ಅಡಿ |
| 10. | ಫಿಜಾ ಡೆವಲಪರ್ಸ್ & ಇಂಟರ್‌ಟ್ರೇಡ್ ಪ್ರೈ.ಲಿ., | ಚಿತ್ರದುರ್ಗ | 119-35 |
| 11. | ಎನ್.ಇ.ಜಿ. ಮೈಕಾನ್ ಇಂಡಿಯಾ ಪ್ರೈ.ಲಿ. | ಚಿತ್ರದುರ್ಗ | 182-14 |
| 12. | ಚಿರಂಜೀವಿ ವಿಂಡ್ ಎನರ್ಜಿ ಲಿ. | ಚಿತ್ರದುರ್ಗ | 17-20 |
| 13. | ಸುಜಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ | ಚಿತ್ರದುರ್ಗ | 25-27 |
| 14. | ಮೆಸರ್ಸ್ ಎವರ್‌ಗ್ರೀನ್ ಎನರ್ಜಿ ಲಿಮಿಟೆಡ್ | ಚಿತ್ರದುರ್ಗ | 2-36 |
| 15. | ಮುರುದವೇಲ್ ಇಂಡಸ್ಟ್ರೀಸ್ ಲಿಮಿಟೆಡ್ | ಚಿತ್ರದುರ್ಗ | 8-14 |
| 16. | ಜಿಂದಾಲ್ ಅಲ್ಯೂಮಿನಿಯಮ್ ಲಿಮಿಟೆಡ್, ಬೆಂಗಳೂರು | ಚಿತ್ರದುರ್ಗ | 80-00 |
| 17. | ಎನ್ನಾರ್ಕಾನ್ ಇಂಡಿಯಾ ಲಿಮಿಟೆಡ್ 208 ಪ್ರೆಸ್ಟಿಜ್ ಸೆಂಟರ್ ಪಾಯಿಂಟ್ ಕನ್ನಿಂಗ್‌ಹ್ಯಾಮ್ ರೋಡ್ ಬೆಂಗಳೂರು | ಚಿತ್ರದುರ್ಗ | 45-00 |
| 18. | ಮೆ::ಜಿ.ಎನ್ ಇನ್ವವೆಸ್ಟ್‌ಮೆಂಟ್ ಅಚಿಡ್ ಟ್ರೇಡಿಂಗ್ ಕಂ.ಪ್ರ.ಲಿಮಿಟೆಡ್ ಮುಂಬೈ | ಚಿತ್ರದುರ್ಗ | 53-00 |
| 19. | ಪಯೋನಿಕ್ ವಿನ್‌ಕಾನ್ ಲಿಮಿಟೆಡ್ ಮಧುರೈ | ಚಿತ್ರದುರ್ಗ | 48-24 |
| 20. | ಮೆ.ಎನಾರ್ ಕಾನ್ ವಿಂಡ್ ಫಾರ್ಮ ಇಂಡಿಯಾನ್ ಲಿಮಿಟೆಡ್ ಬೆಂಗಳೂರು | ಚಿತ್ರದುರ್ಗ | 202-00 |
| 21. | ರಿಲಿಯಲ್ ವಿಂಡ್ ಎನರ್ಜಿ ಲಿಮಿಟೆಡ್ | ಚಿತ್ರದುರ್ಗ | 7-00 |
| 22. | ವ್ಯವಸ್ಥಾಪಕ ನಿರ್ದೇಶಕರು ಮೆ:ಸಾಗಿಟಾರ್ ವೆಂಚರ್ಸ್ ಇಂಡಿಯಾ ಪ್ರೈ.ಲಿ.ಬೆಂಗಳೂರು (ಗುತ್ತಿಗೆ) | ಚಿತ್ರದುರ್ಗ | 1000-00 |
| 23. | ಜಿ.ವಿ.ಆರ್. ಇನ್ಫ್ರಾಟೆಕ್ ಪ್ರೈ.ಲಿ. | ಚಿತ್ರದುರ್ಗ | 4-00 |
| 24. | ವಿಜೆಮ್ಯಾನ್ ಲಿ., ಬೆಂಗಳೂರು. | ಚಿತ್ರದುರ್ಗ | 25-24 |
| 25. | ಬಿ.ಎಸ್.ಎನ್.ಎಲ್. | ಚಿತ್ರದುರ್ಗ | 0-05 |
| 26. | ಎನ್.ವಿ.ಆರ್. ರಿನೀವ್ ಪ್ರೈ.ಲಿ., ಕೊಲ್ಕತ್ತಾ | ಚಿತ್ರದುರ್ಗ | 39-29 |

ಸರ್ಕಾರಿ ಜಮೀನುಗಳನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಲಾಗುವುದು:-

1. ಮಂಜೂರಾದ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು ಹಾಗೂ ಮಂಜೂರಾತಿದಾರರಿಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂಪಡೆಯಲಾಗುವುದು.

2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ ಹಾಗೂ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.

3. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.

4. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

5. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರತಕ್ಕದ್ದು ಹಾಗೂ ಮಂಜೂರಾದ ಜಮೀನನ್ನು ಸಂಸ್ಥೆಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ಜಿಲ್ಲಾಧಿಕಾರಿಗಳು ವಿಧಿಸಬಹುದಾಗಿರುತ್ತದೆ.

****